# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2225
ಸದಸ್ಯರ ಹೆಸರು : ಡಾ|| ಕೆ.ಗೋವಿಂದರಾಜ್
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 18.03.2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನಗರದ ಸಾರ್ವಜನಿಕ ಸಾರಿಗೆಯಾಗಿ ಎಲೆಕ್ಟ್ರಿಕ್ ಬಸ್ಸುಗಳನ್ನು ಬಳಸಲಾಗುತ್ತಿದೆಯೇ; ಹಾಗಿದ್ದಲ್ಲಿ, ಕಳೆದ 2 ವರ್ಷಗಳ ಅವಧಿಯಲ್ಲಿ ಬೆಂಗಳೂರು ನಗರ ರಸ್ತೆಗಳ ಸಂಚಾರಕ್ಕೆ ಖರೀದಿಸಲಾದ ಮತ್ತು ಗುತ್ತಿಗೆ ಆಧಾರದ ಮೇಲೆ ಪಡೆದುಕೊಂಡಿರುವ ಈ ಎಲೆಕ್ಟ್ರಿಕ್ ಬಸ್‌ಗಳ ಸಂಖ್ಯೆ ಎಷ್ಟು; (ಮಾಹಿತಿಯನ್ನು ಪ್ರತ್ಯೇಕವಾಗಿ ಒದಗಿಸುವುದು) | ಹೌದು.<br><br>ಪ್ರಪ್ರಥಮವಾಗಿ 2021-22ನೇ ಸಾಲಿನ ಡಿಸೆಂಬರ್-2021ರ ಮಾಹೆಯಲ್ಲಿ ಸಂಸ್ಥೆಯು ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆಯನ್ನು ಪ್ರಾರಂಭಿಸಿದೆ. ಈ ನಿಟ್ಟಿನಲ್ಲಿ, ಗುತ್ತಿಗೆ ಆಧಾರದ ಮೇಲೆ 90 (9 ಮೀ.) ಎಲೆಕ್ಟ್ರಿಕ್ ಬಸ್ಸುಗಳನ್ನು ಬೆಂಗಳೂರು ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ ಮೆ|| ಎನ್.ಟಿ.ಪಿ.ಸಿ. ವಿದ್ಯುತ್ ವ್ಯಾಪಾರ ನಿಗಮ ಲಿಮಿಟೆಡ್ ಹಾಗೂ 300 (12 ಮೀ.) ಎಲೆಕ್ಟ್ರಿಕ್ ಬಸ್ಸುಗಳನ್ನು ಕೇಂದ್ರ ಸರ್ಕಾರದ ಫೇಮ್-2 ಯೋಜನೆ ಅಡಿಯಲ್ಲಿ GCC (Gross Cost Contract) ಆಧಾರದ ಮೇಲೆ ಮೆ|| ಅಶೋಕ್ ಲೇಲ್ಯಾಂಡ್/ಮೆ|| ಸ್ವಿಚ್ ಮೊಬಿಲಿಟಿ ಆಟೋಮೊಟಿವ್ ಲಿಮಿಟೆಡ್‌ರವರಿಗೆ ಆಚರಣೆ ಮಾಡಲು ಕಾರ್ಯಾದೇಶಿಸಿದೆ.<br><br>ಪ್ರಸ್ತುತ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ಮೆ|| ಎನ್.ಟಿ.ಪಿ.ಸಿ ವಿದ್ಯುತ್ ವ್ಯಾಪಾರ ನಿಗಮ ಲಿಮಿಟೆಡ್‌ರವರಿಂದ 24 ಎಲೆಕ್ಟ್ರಿಕ್ ಬಸ್ಸುಗಳನ್ನು ಕಾರ್ಯಾಚರಣೆಗೊಳಿಸಲಾಗುತ್ತಿದೆ. ಉಳಿದ ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆಯನ್ನು ಹಂತ ಹಂತವಾಗಿ ಪ್ರಾರಂಭಿಸಲಾಗುವುದು.<br><br>ಬೆಂ.ಮ.ಸಾ.ಸಂಸ್ಥೆಯಲ್ಲಿ ಎಲೆಕ್ಟ್ರಿಕ್ ಬಸ್ಸುಗಳನ್ನು ಖರೀದಿಸಿರುವುದಿಲ್ಲ. |
| ಆ. | ಈ ಎಲೆಕ್ಟ್ರಿಕ್ ಬಸ್‌ಗಳ ಓಡಾಟಕ್ಕೆ ವಿನಿಯೋಗಿಸಲಾದ ಅನುದಾನ ಮತ್ತು | ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ವತಿಯಿಂದ, ಬೆಂ.ಮ.ಸಾ.ಸಂಸ್ಥೆಗೆ ಒಟ್ಟಾರೆ |

| | | |
|---|---|---|
| | ಸರ್ಕಾರಕ್ಕೆ ಸಂದಾಯವಾಗುತ್ತಿರುವ ಲಾಭ/ ನಷ್ಟದ ಬಗ್ಗೆ (ಮಾಹಿತಿ ಒದಗಿಸುವುದು) | ರೂ.50.00 ಕೋಟಿ ಅನುದಾನವನ್ನು ನೀಡಲಿದೆ. ಸದರಿ ಅನುದಾನದಲ್ಲಿ ಪ್ರತಿ ಬಸ್ಸಿಗೆ ರೂ.50.00 ಲಕ್ಷದಂತೆ, 90 ಬಸ್ಸುಗಳಿಗೆ ರೂ.45.00 ಕೋಟಿ ಮೊತ್ತವನ್ನು ಮೆ\|\| ಎನ್.ಟಿ.ಪಿ.ಸಿ ವಿದ್ಯುತ್ ವ್ಯಾಪಾರ ನಿಗಮ ಲಿಮಿಟೆಡ್‌ರವರಿಗೆ ಪಾವತಿಸಲಾಗುವುದು. ಉಳಿದ ಮೊತ್ತವನ್ನು ಬೆಂ.ಮ.ಸಾ.ಸಂಸ್ಥೆಯು ಚಾರ್ಜಿಂಗ್ ಮೂಲಭೂತ ಸೌಕರ್ಯಕ್ಕಾಗಿ ಉಪಯೋಗಿಸಲಿದೆ.<br><br>ಕೇಂದ್ರ ಸರ್ಕಾರದ ಭಾರಿ ಕೈಗಾರಿಕೆ ಇಲಾಖೆಯ ಫೇಮ್-2 ಯೋಜನೆಯಡಿಯಲ್ಲಿ, ಕೇಂದ್ರ ಸರ್ಕಾರವು ಪ್ರತಿ ಬಸ್ಸಿಗೆ ರೂ.55.00ಲಕ್ಷ ಮೀರದಂತೆ 300 ಬಸ್ಸುಗಳಿಗೆ ಗರಿಷ್ಠ ರೂ.165.00 ಕೋಟಿ ಮೊತ್ತವನ್ನು ಹಾಗೂ ರಾಜ್ಯ ಸರ್ಕಾರವು ಪ್ರತಿ ಬಸ್ಸಿಗೆ ರೂ.33.33 ಲಕ್ಷದಂತೆ, 300 ಬಸ್ಸುಗಳಿಗೆ ರೂ.100.00 ಕೋಟಿ ಮೊತ್ತವನ್ನು ಒಟ್ಟಾರೆ ಪ್ರತಿ ಬಸ್ಸಿಗೆ ರೂ.88.33 ಲಕ್ಷದಂತೆ, ಕೇಂದ್ರ ಹಾಗೂ ರಾಜ್ಯ ಸರ್ಕಾರವು ಒಟ್ಟಾರೆ ರೂ.265.00 ಕೋಟಿ ಅನುದಾನವನ್ನು ನೀಡಲಿದೆ. ಸದರಿ ಅನುದಾನವನ್ನು ಮೆ\|\| ಅಶೋಕ್ ಲೇಲ್ಯಾಂಡ್/ ಮೆ\|\| ಸ್ವಿಚ್ ಮೊಬಿಲಿಟಿ ಆಟೋಮೊಟಿವ್ ಲಿಮಿಟೆಡ್‌ರವರಿಗೆ ಪಾವತಿಸಲಾಗುವುದು.<br><br>ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಿಂದ ಪ್ರಥಮ ಹಂತದಲ್ಲಿ 06 ಎಲೆಕ್ಟ್ರಿಕ್ ಬಸ್ಸುಗಳ (09 ಮೀ) ಕಾರ್ಯಾಚರಣೆಯನ್ನು ದಿನಾಂಕ:27-12-2021ರಿಂದ ಪ್ರಾರಂಭಿಸಲಾಗಿದೆ. ಪ್ರಸ್ತುತ 24 ಎಲೆಕ್ಟ್ರಿಕ್ ಬಸ್ಸುಗಳನ್ನು ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಕಾರ್ಯಾಚರಣೆಗೊಳಿಸಲಾಗುತ್ತಿದೆ. ಇತ್ತೀಚೆಗಷ್ಟೆ ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆಯನ್ನು ಪ್ರಾರಂಭಿಸಿರುವುದರಿಂದ, ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆಯಿಂದ ಉಂಟಾಗುವ ಲಾಭ/ನಷ್ಟ ಕುರಿತು ಮುಂದಿನ ದಿನಗಳಲ್ಲಿ ಅವಲೋಕಿಸಲಾಗುವುದು. |
| ಇ. | ಎಲೆಕ್ಟ್ರಿಕ್ ಬಸ್‌ಗಳ ಓಡಾಟ ಮತ್ತು | ಕೇಂದ್ರ ಸರ್ಕಾರವು, ಭಾರೀ ಕೈಗಾರಿಕಾ |

| | | | |
|---|---|---|---|
| | | | ಡಿಸೇಲ್ ದರ ನಿರಂತರವಾಗಿ ಹೆಚ್ಚಳವಾಗುತ್ತಿರುವ ನಿಟ್ಟಿನಲ್ಲಿ ಸಂಸ್ಥೆಯಿಂದ ಡಿಸೇಲ್ ಬಳಕೆ ಮಾಡಿ ಕಾರ್ಯಾಚರಿಸುತ್ತಿರುವ ಬಸ್ಸುಗಳ ಆಚರಣಾ ವೆಚ್ಚವು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಬೆಂ.ಮ.ಸಾ.ಸಂಸ್ಥೆಯು ಡಿಸೇಲ್‌ಗೆ ಪರ್ಯಾಯವಾಗಿ ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆ ಪ್ರಾರಂಭಿಸಿದೆ.<br>ಪ್ರಾರಂಭದ ವರ್ಷಗಳಲ್ಲಿ, ಎಲೆಕ್ಟ್ರಿಕ್ ಬಸ್ಸುಗಳ ಆಚರಣಾ ವೆಚ್ಚವು ಸಾರಿಗೆ ಆದಾಯಕ್ಕಿಂತ ಹೆಚ್ಚಾಗುವ ಸಾಧ್ಯತೆ ಇರುತ್ತದೆ. ತದನಂತರದ ವರ್ಷಗಳಲ್ಲಿ, ಎಲೆಕ್ಟ್ರಿಕ್ ಬಸ್ಸುಗಳ ಸಾರಿಗೆ ಆದಾಯ ಆಚರಣಾ ವೆಚ್ಚಕ್ಕೆ ಸಮ/ಹೆಚ್ಚಾಗುವ ಸಂಭವ ಇರುವುದರಿಂದ, ಎಲೆಕ್ಟ್ರಿಕ್ ಬಸ್ಸುಗಳ ಕಾರ್ಯಾಚರಣೆಯಿಂದ ಲಾಭ ನಿರೀಕ್ಷಿಸಲಾಗಿದೆ. |

ಸಂಖ್ಯೆ: ಟಿಡಿ 108 ಟಿಸಿಕ್ಯೂ 2022

**(ಬಿ.ಶ್ರೀರಾಮುಲು)**
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು